


# ಜ್ಯೋತಿಷ ಮಿತ್ರ

ಆನ್ಲೈನ್ ದಿನಪತ್ರಿಕೆ

॥ ವೇದೋಽಖಿಲೋ ಧರ್ಮಮೂಲಮ್ ॥

www.jyothishamithra.com

ಸಂಚಿಕೆ : 961 03-04-2021 ಶನಿವಾರ

ಶಾರ್ವರಿಸಂವತ್ಸರ ಉತ್ತರಾಯಣ ಶಿಶಿರಋತು ಫಾಲ್ಗುನಮಾಸ ಕೃಷ್ಣಪಕ್ಷ

## ನಿತ್ಯ ಪಂಚಾಂಗ

ತಿಥಿ : ಸಪ್ತಮಿ (ಗಂಟೆ 28.12ರ ವರೆಗೆ)

ನಕ್ಷತ್ರ : ಮೂಲಾ (ಗಂಟೆ 26.37ರ ವರೆಗೆ)

ರಾಹುಕಾಲ : (ಗಂಟೆ 09.29 AM - 11.02 AM ವರೆಗೆ)

ಗುಳಿಕಕಾಲ : (ಗಂಟೆ 06.25 AM - 07.57 AM ವರೆಗೆ)

## ಸುಜ್ಞಾನ

ತುಳಿದು ಬದುಕಿದವರು ಬಹುಬೇಗ ಅಳಿಯುತ್ತಾರೆ. ತಿಳಿದು ಬದುಕಿದವರು ಅಳಿದ ಮೇಲೂ ಉಳಿಯುತ್ತಾರೆ.



# ವಾಸ್ತು ಪ್ರಕಾರ

- ಮನೆಯಲ್ಲಿ ಚಿಕ್ಕ ಪುಟ್ಟ ಸ್ಥಳವನ್ನು ಕೂಡ ಅಂದಗೊಳಿಸುವುದರಿಂದ ನಿಮ್ಮ ಮನೆಯ ಸೌಂದರ್ಯ ಇಮ್ಮಡಿಯಾಗುತ್ತದೆ. ಹೀಗಿದ್ದಾಗ ಮನೆಯ ಮುಂಬಾಗಿಲನ್ನು ನೀವು ಸಾಧ್ಯವಾದಷ್ಟು ದೊಡ್ಡದಾಗಿ ಇರಿಸಿಕೊಂಡಲ್ಲಿ ಇದು ಮನೆಯ ಸೌಂದರ್ಯಕ್ಕೆ ಕಲಶವಿಟ್ಟಂತೆ ಕಾಣುವುದರ ಜೊತೆಗೆ ಧನಾತ್ಮಕ ಶಕ್ತಿ ಮನೆಯೊಳಗೆ ಪ್ರವೇಶವಾಗುತ್ತದೆ.
- ಮನೆಯಿಂದ ನಕಾರಾತ್ಮಕ ಶಕ್ತಿಯನ್ನು ಹೊರಹಾಕಲು ಸಿದ್ಧ ಶುಕ್ರ ಯಂತ್ರವನ್ನು ಸ್ಥಾಪಿಸಿ.
- ಉತ್ತರ ಮತ್ತು ಈಶಾನ್ಯ ಮೂಲೆಯಲ್ಲಿ ಯಾವುದೇ

ಕೊಳಕು, ಡಸ್ಟ್ಬಿನ್ಗಳು ಇತ್ಯಾದಿ ಇರಬಾರದು.

- ಶಕ್ತಿಯುತ ಕಂಪನಗಳನ್ನು ಹೆಚ್ಚಿಸಲು, ವಾರಕ್ಕೆ ಎರಡು ಬಾರಿ ರಾಕ್ ಸಾಲ್ಟ್ ನಿಂದ ಮನೆಯನ್ನು ಶುದ್ಧೀಕರಿಸಿ.
- ದೇವರಕೋಣೆಯು ಎರಡು ಕೋಣೆಯ ಮಧ್ಯೆ ಇರಬಾರದು. ಹಾಗೂ ಬಾತ್ರೂಮ್ ಟಾಯ್ಲೆಟ್ ಗೋಡೆಗೆ ಅಂಟಿಕೊಂಡು ಇರಬಾರದು.
- ಮಲಗುವ ಕೋಣೆಯಲ್ಲಿ ಸಸ್ಯಗಳನ್ನು ಬೆಳೆಸುವುದು ಅಷ್ಟೊಂದು ಒಳ್ಳೆಯದಲ್ಲ.
- ದಕ್ಷಿಣದಲ್ಲಿ ಭೂಗತ ಟ್ಯಾಂಕ್ ಅಥವಾ ಹೊಂಡವು ಹಣಕಾಸಿಗೆ ತುಂಬ ಹಾನಿಕಾರಕ.
- ಮನೆಯ ಕಿಟಕಿ, ಬಾಗಿಲು ಅಥವಾ ಪೀಠೋಪಕರಣಗಳ ತಯಾರಿಕೆಗೆ ಬಸುರೀಮರ, ಬಿದಿರು, ಹುಣಸೆ ಮರ, ಕಳ್ಳಿಮರ, ತಾಳೆಮರ, ಮುಳ್ಳುಗಳಿರುವ ಮರ, ಅರ್ಧ ಸುಟ್ಟ ಮರ, ಆಲ,

ಅಶ್ವತ್ಥ, ಅಗಸಿ, ಮುತ್ತುಗ, ಹೊಂಗೆ ಮರಗಳನ್ನು ಬಳಸಬಾರದು.

- ವಿದ್ಯಾರ್ಥಿಯು ಅಧ್ಯಯನ ಮಾಡುವ ಕೊಠಡಿ ಪೂರ್ವ ಈಶಾನ್ಯ ಅಥವ ಉತ್ತರದ ಭಾಗಗಳಲ್ಲಿ ಇದ್ದರೆ ಒಳ್ಳೆಯದು.
- ರಾತ್ರಿ ನಿದ್ರಿಸುವ ಸಮಯದಲ್ಲಿ ಸ್ವಲ್ಪ ಏಲಕ್ಕಿಯನ್ನು ಬಟ್ಟೆಯೊಂದರಲ್ಲಿ ಸುತ್ತಿ ದಿಂಬಿಗೆ ಸಮೀಪ ಇಟ್ಟುಕೊಂಡರೆ ದುಃಸ್ವಪ್ನಗಳು, ರಾತ್ರಿ ಹೊತ್ತು ಭಯವನ್ನು ನಿವಾರಿಸಿಕೊಳ್ಳಬಹುದು.
- ನಿದ್ದೆಗೆ ಮುನ್ನ ಇಷ್ಟ ದೈವವನ್ನು ಅಥವಾ ಇಷ್ಟವಾದ ಮಂತ್ರಗಳನ್ನು ಪಠಿಸಿದರೆ ಪ್ರಶಾಂತವಾದ ನಿದ್ದೆ ಗ್ಯಾರಂಟಿ.
- ಮಲಗುವ ಕೋಣೆ ಅಥವಾ ಮಂಚಕ್ಕೆ ಸಮೀಪ ಕಸದಬುಟ್ಟಿ, ಚಪ್ಪಲಿ ಸ್ಟ್ಯಾಂಡ್ ಇರದಂತೆ ನೋಡಿಕೊಳ್ಳಬೇಕು. ಮಲಗುವ ಕೋಣೆ

ಚೆಲ್ಲಾಪಿಲ್ಲಿಯಾಗಿದ್ದರೆ ಮನೆಯಲ್ಲಿ ಪ್ರತಿಕೂಲ ವಾತಾವರಣ ಹೆಚ್ಚುತ್ತದೆ.

- ಈಶಾನ್ಯ ದಿಕ್ಕಿನಲ್ಲಿರುವ ಪೂಜಾ ಕೊಠಡಿ ಮತ್ತು ವಾಸದ ಕೋಣೆಯು ಬಹಳ ಶುಭ.


ಜ್ಯೋತಿಷ ಮಿತ್ರ ಆನ್ಲೈನ್
ದಿನಪತ್ರಿಕೆ ಪ್ರಸ್ತುತಪಡಿಸುತ್ತಿದೆ

ಡಿಜಿಟಲ್ ಆನ್ಲೈನ್
ಜ್ಯೋತಿಷ ಕ್ಲಾಸ್

ಶುಲ್ಕದ ಮೇಲೆ
ವಿಶೇಷ ರಿಯಾಯಿತಿ

- ಆನ್ಲೈನ್ ಡಿಜಿಟಲ್ ಕ್ಲಾಸ್
- ತರಗತಿಯನ್ನು ಯಾವಾಗ ಬೇಕಾದರೂ ವೀಕ್ಷಿಸಬಹುದಾಗಿದೆ.
- ಸುಲಭವಾಗಿ ಅರ್ಥವಾಗುತ್ತದೆ.




ಸಂಪರ್ಕಿಸಿ :
9986671473




www.jyothishamithra.com




# ಸ್ತ್ರೀ ಜಾತಕ ವಿಮರ್ಶೆ

**ಜನನ ದಿನಾಂಕ : 06-02-1996 ಸಮಯ : 11.45 AM ಸ್ಥಳ : ಮಂಗಳೂರು**

| | | | |
|---|---|---|---|
| ಶುಕ್ರ<br>ಕೇತು | ಲಗ್ನ | ಮಾಂದಿ | |
| ಶನಿ | ಗ್ರಹ ಕುಂಡಲಿ | | |
| ರವಿ<br>ಕುಜ | | | ಚಂದ್ರ |
| ಬುಧ<br>ಗುರು | | | ರಾಹು |

ಇದು ಮೇಷ ಲಗ್ನದ ಸ್ತ್ರೀ ಜಾತಕ. ಲಗ್ನಾಧಿಪತಿ ಕುಜ ಉಚ್ಚನಾಗಿ ರುಚಕಯೋಗದಲ್ಲಿ ಇರುವನು.ಲಗ್ನಾಧಿಪತಿ ಕುಜನಾಗಿರುವುದರಿಂದ ಹಠ,ಕೋಪದ ಸ್ವಭಾವ. ಕಡ್ಡಿ ಮುರಿದಂತೆ ಮಾತನಾಡುವ ಗುಣ. ಕುಜನೊಂದಿಗೆ ಪಂಚಮಾಧಿಪತಿ ರವಿ ಇರುವುದರಿಂದ ನಾಯಕತ್ವದ ಗುಣ, ಸ್ವಾಭಿಮಾನ, ನಾನು - ನನ್ನದು ಎಂಬ ಅಹಂಕಾರವನ್ನು ಹೊಂದಿರುತ್ತಾರೆ. ಮುಖದಲ್ಲಿ ಎಂತಹವರನ್ನೂ ಆಕರ್ಷಿಸುವ ತೇಜಸ್ಸು, ಸಮಾಜ ತನ್ನನ್ನು ಗೌರವಿಸಬೇಕೆಂಬ ಬಯಕೆಯನ್ನು ಹೊಂದಿರುತ್ತಾರೆ. ಕುಜ-ರವಿ ಇಬ್ಬರೂ ಆಗ್ನಿಗ್ರಹ ವಾಗಿರುವುದರಿಂದ ದೇಹ ಉಷ್ಣ ಪ್ರಕೃತಿಯನ್ನು ಹೊಂದಿರುತ್ತದೆ.

ಲಗ್ನವನ್ನು ಪಾಪಗ್ರಹರಾದ ಶನಿ-ಕುಜರು ವೀಕ್ಷಿಸುವುದರಿಂದ ಅನಾರೋಗ್ಯ ಸಮಸ್ಯೆ ಶತೃಭಾದೆ ಅಧಿಕವಾಗಿರುತ್ತದೆ. ಆದರೆ ಶುಭಗ್ರಹನಾದ ಗುರು

ಲಗ್ನವನ್ನು ನೋಡುವುದರಿಂದ ಅಶುಭ ಫಲಗಳ ಪ್ರಭಾವ ಕಡಿಮೆಯಾಗುತ್ತದೆ.

ವಿದ್ಯಾಕಾರಕನಾದ ಬುಧನಿಗೆ ಭಾಗ್ಯಭಾವದಲ್ಲಿ ಸ್ವಕ್ಷೇತ್ರ ಸ್ಥಿತ ಜ್ಞಾನಕಾರಕನಾದ ಗುರುವಿನ ಯೋಗ ಇರುವುದು, ಚತುರ್ಥಾಧಿಪತಿ ಪಂಚಮದಲ್ಲಿ, ಪಂಚಮಾಧಿಪತಿ ರವಿಯು ಲಗ್ನಾಧಿಪತಿ ಯೊಂದಿಗಿರುವುದರಿಂದ ಈಕೆ ಎಂ.ಬಿ.ಬಿ.ಎಸ್ . ಪದವಿಯನ್ನು ವಿಶೇಷ ಶ್ರೇಣಿಯಲ್ಲಿ ಪೂರ್ಣಗೊಳಿಸಿ ರ್ಯಾಂಕ್ ನ್ನು ಪಡೆದಿರುತ್ತಾರೆ.

ರುಚಕಯೋಗದೊಂದಿಗೆ ಪಿತೃಕಾರಕ ರವಿಯ ಯೋಗ ಲಗ್ನಾಧಿಪತಿಗೆ ಇರುವುದರಿಂದ ಅಪಾರ ಪ್ರಮಾಣದ ಪಿತ್ರಾರ್ಜಿತ ಆಸ್ತಿಯನ್ನು ಹೊಂದಿರುತ್ತಾರೆ.

ಸಪ್ತಮ ಸ್ಥಾನವು ಮಿತ್ರಸ್ಥಾನವಾಗಿದೆ. ಇದರ ಅಧಿಪತಿ

ಶುಕ್ರನು ವ್ಯಯಭಾವದಲ್ಲಿ ಕೇತುವಿನೊಂದಿಗೆ ಇರುವನು. ಯುವಕನೊಬ್ಬನ ಕಪಟ ಪ್ರೇಮಕ್ಕೆ ಸಿಲುಕಿದ ಪರಿಣಾಮ ಈಕೆ ಅಪಾರ ಪ್ರಮಾಣದ ಹಣ, ಚಿನ್ನಾಭರಣವನ್ನು ಕಳೆದಿಕೊಳ್ಳಬೇಕಾಯಿತು. ಐಶ್ವರ್ಯ ಕಾರಕನಾದ ಶುಕ್ರನು ಮಿತ್ರ ಸ್ಥಾನಾಧಿಪತಿಯಾಗಿ ವ್ಯಯಭಾವದಲ್ಲಿ ಆಕಸ್ಮಿಕ, ಮೋಸ, ವೈರಾಗ್ಯ ಕಾರಕನಾದ ಕೇತುವಿನೊಂದಿಗೆ ಇರುವುದನ್ನು ಗಮನಿಸಬಹುದು.





ಈಗ 'ಜ್ಯೋತಿಷ ಮಿತ್ರ' ದಿನಪತ್ರಿಕೆ ಸಂಪೂರ್ಣ ಉಚಿತ....!
ಚಂದಾದಾರರಾಗಲು Add Me to JM ಎಂದು ಟೈಪ್ ಮಾಡಿ 9535283535 ಸಂಖ್ಯೆಗೆ ವಾಟ್ಸಪ್ ಮಾಡಿ.



ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.
PH : 9986671473 / 9535283535
jmonline@gmail.com www.jyothishamithra.com